# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 247

ಸದಸ್ಯರ ಹೆಸರು : ಶ್ರೀ ಕೆ.ಸಿ ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸಬೇಕಾದ ದಿನಾಂಕ : 14.09.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೋವಿಡ್-19 ಕಾರಣದಿಂದಾಗಿ ಕಳೆದ ಎರಡು ವರ್ಷಗಳಿಂದ ಮುಚ್ಚಲಾದ ಸಣ್ಣ ಮತ್ತು ಮಧ್ಯಮ ಉದ್ದಿಮೆಗಳ (ಎಂಎಸ್ಎಂಇ) ಸಂಖ್ಯೆ ಎಷ್ಟು; | 2020ನೇ ಸಾಲಿನಲ್ಲಿ ಕಾಣಿಸಿಕೊಂಡ ಕೊರೋನಾ ರೋಗ ಹರಡುವಿಕೆಯಿಂದಾಗಿ ಲಾಕ್‌ಡೌನ್ ಪ್ರಾರಂಭದಲ್ಲಿ ಅಗತ್ಯ ಸೇವೆಯನ್ನು ಒದಗಿಸುವ ಕೈಗಾರಿಕೆಗಳನ್ನು ಹೊರತು ಪಡಿಸಿ ಎಲ್ಲಾ ಕೈಗಾರಿಕೆಗಳು ತಮ್ಮ ಚಟುವಟಿಕೆಯನ್ನು ಸ್ಥಗಿತಗೊಳಿಸಿದ್ದವು. ನಂತರ ಲಾಕ್‌ಡೌನ್ ಹಂತ ಹಂತವಾಗಿ ತೆರವುಗೊಳಿಸಿದಾಗ ಈ ಕೈಗಾರಿಕೆಗಳಿಗೆ ತಮ್ಮ ಚಟುವಟಿಕೆಯನ್ನು ಪ್ರಾರಂಭಿಸಲು ಅನುಮತಿ ನೀಡಲಾಯಿತು. ಈ ಅನುಮತಿಯನ್ನು ಏಕಕಾಲದಲ್ಲಿ ನೀಡಲು ಸಾಧ್ಯವಾಗದ ಕಾರಣ ಕಾರ್ಯಾರಂಭ ಮಾಡಿದ ಕೈಗಾರಿಕೆಗಳ ಅಂಕಿ ಅಂಶಗಳನ್ನು ಸೂಕ್ತ ವ್ಯವಸ್ಥೆಯ ಕಾರಣದಿಂದಾಗಿ ನಿರ್ವಹಿಸಲು ಸಾಧ್ಯವಾಗಿರುವುದಿಲ್ಲ. ಆದರೆ ಒಂದು ಅಂದಾಜಿನ ಪ್ರಕಾರ ಶೇ 95% ಕೈಗಾರಿಕೆಗಳು ತಮ್ಮ ಚಟುವಟಿಕೆಗಳನ್ನು ಪ್ರಾರಂಭಿಸಿದ್ದು ಶೇ 92% ಕಾರ್ಮಿಕರು ಕಾರ್ಯನಿರ್ವಹಿಸುತ್ತಿದ್ದಾರೆ. |
| ಆ) | ಈ ಉದ್ಯಮಗಳಿಗೆ ಕೋವಿಡ್ ಸಮಯದಲ್ಲಿ ನೀಡಲಾದ ಪ್ಯಾಕೇಜ್‌ಗಳೇನು; ಇವರ ಸಹಾಯಕ್ಕಾಗಿ ಸರ್ಕಾರ ಮಾಡಿರುವ ಅನುಕೂಲತೆಗಳೇನು; | ಕೊರೋನಾದಿಂದ ಅನೇಕ ಸಣ್ಣ ಉದ್ಯಮಗಳಿಗೆ ತೊಂದರೆಯಾಗಿದ್ದು, ಈ ಸಂದರ್ಭದಲ್ಲಿ ಸಣ್ಣ ಉದ್ದಿಮೆದಾರರಿಗೆ ಪ್ರೋತ್ಸಾಹ ನೀಡಲು ಈ ಕೆಳಗಿನ ಯೋಜನೆಗಳನ್ನು ಜಾರಿಗೊಳಿಸಲಾಗಿದೆ.<br><br>ಕೇಂದ್ರ ಸರ್ಕಾರ ಘೋಷಿಸಿರುವ "ಆತ್ಮ ನಿರ್ಭರ ಭಾರತ ಅಭಿಯಾನ" ದ ಅಡಿಯಲ್ಲಿ ಅತೀ ಸಣ್ಣ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸಲು ಮತ್ತು ಉದ್ಯಮಗಳಿಗೆ ಆರ್ಥಿಕ ನೆರವು ನೀಡುವ ಯೋಜನೆಯಲ್ಲಿ ಈ ಕೆಳಗಿನ ನೆರವು ದೊರೆತಿದೆ.<br><br>ಭಾರತ ಸರ್ಕಾರವು "ಇ.ಸಿ.ಎಲ್.ಜಿ"-ಎಮರ್ಜೆನ್ಸಿ ಕ್ರೆಡಿಟ್ ಲೈನ್ ಗ್ಯಾರಂಟಿ ಯೋಜನೆಯನ್ನು ಜಾರಿಗೆ ತಂದಿದ್ದು, ಇದರನ್ವಯ ಫೆಬ್ರವರಿ 2020ರ ಅಂತ್ಯಕ್ಕೆ ಬ್ಯಾಂಕ್‌ಗಳಲ್ಲಿ ಬಾಕಿ ಇರುವ ಎಂ.ಎಸ್.ಎಂ.ಇ ಘಟಕಗಳ ಸಾಲದ ಮೊತ್ತಕ್ಕೆ ಶೇ.20ರಷ್ಟು ಹೆಚ್ಚುವರಿ ಸಾಲವನ್ನು ಯಾವುದೇ ಹೆಚ್ಚುವರಿ ಖಾತರಿ ಇಲ್ಲದೇ ನೀಡುವ ಯೋಜನೆಯನ್ನು ಜಾರಿಗೆ ತಂದಿರುತ್ತದೆ. |

ಕೊರೋನದಿಂದ ಸಂಕಷ್ಟದಲ್ಲಿರುವ ಸಣ್ಣ ಕೈಗಾರಿಕೆಗಳಿಗೆ ರಾಜ್ಯ ಸರ್ಕಾರದಿಂದ ಈ ಕೆಳಗಿನ ಯೋಜನೆ ರೂಪಿಸಲಾಗಿರುತ್ತದೆ.

1. ಇಂಧನ ಇಲಾಖೆಯು ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ ಏಪ್ರಿಲ್ ಮತ್ತು ಮೇ 2020 ತಿಂಗಳ ಬೇಡಿಕೆ ಶುಲ್ಕ ಮತ್ತು ಸ್ಥಿರ ಶುಲ್ಕವನ್ನು ಮನ್ನಾ ಮಾಡಿರುತ್ತದೆ.

2. ಇಂಧನ ಇಲಾಖೆಯು ವಿದ್ಯುತ್ ಬಿಲ್‌ನ್ನು ಪ್ರಾಮಾಣಿಕವಾಗಿ ನಿಗದಿತ ಅವಧಿಯೊಳಗೆ ಪಾವತಿಸುವ ಕೈಗಾರಿಕೆಗಳಿಗೆ ರಿಯಾಯಿತಿಯನ್ನು ನೀಡಿರುತ್ತದೆ. ಹೆಚ್‌ಟಿ ಗರಿಷ್ಠ ಮಿತಿ ರೂ.1 ಲಕ್ಷ, ಎಲ್‌ಟಿ ಗರಿಷ್ಠ ಮಿತಿ ರೂ.10,000/-

| | |
|---|---|
| 1 ರಿಂದ 5 ದಿನದೊಳಗೆ ಪಾವತಿಸಿದಲ್ಲಿ | ಶೇ 1% ರಿಯಾಯಿತಿ |
| 6 ರಿಂದ 15 ದಿನದೊಳಗೆ ಪಾವತಿಸಿದಲ್ಲಿ | ಶೇ 0.5% ರಿಯಾಯಿತಿ |
| 15 ರಿಂದ 30 ದಿನದೊಳಗೆ ಪಾವತಿಸಿದಲ್ಲಿ | ಯಾವುದೇ ರಿಯಾಯಿತಿ ಇರುವುದಿಲ್ಲ |

3. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಉದ್ಯಮಶೀಲರು ತಮಗೆ ಹಂಚಿಕೆಯಾದ ನಿವೇಶನಗಳ ಕಂತುಗಳನ್ನು ಮಾರ್ಚ್, ಏಪ್ರಿಲ್ ಮತ್ತು ಮೇ 2020 ತಿಂಗಳಲ್ಲಿ ಪಾವತಿಸದ್ದಲ್ಲಿ ಆ ಪಾವತಿಯನ್ನು ಕ್ರಮವಾಗಿ 3 ತಿಂಗಳು ಮುಂದೂಡಲಾಗಿದೆ ಮತ್ತು ಈ ಮೊತ್ತಕ್ಕೆ ಯಾವುದೇ ಬಡ್ಡಿಯನ್ನು ವಿಧಿಸುವುದಿಲ್ಲ.

4. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮವು ಉದ್ಯಮಶೀಲರು ತಮಗೆ ಹಂಚಿಕೆಯಾದ ನಿವೇಶನಗಳ ಕಂತು, ಮಳಿಗೆಗಳ ಬಾಡಿಗೆ ಮತ್ತು ನೀರಿನ ಶುಲ್ಕಗಳ ಏಪ್ರಿಲ್, ಮೇ ಮತ್ತು ಜೂನ್ 2020 ತಿಂಗಳುಗಳ ಕಂತನ್ನು ಈ ಕೆಳಗಿನಂತೆ ಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ಇದಕ್ಕೆ ಯಾವುದೇ ಬಡ್ಡಿಯನ್ನು ವಿಧಿಸಲಾಗುವುದಿಲ್ಲ.

| | |
|---|---|
| ಏಪ್ರಿಲ್ 2020 ತಿಂಗಳ ಕಂತು | ಜೂನ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು. |
| ಮೇ 2020 ತಿಂಗಳ ಕಂತು | ಜುಲೈ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು. |
| ಜೂನ್ 2020 ತಿಂಗಳ ಕಂತು | ಆಗಸ್ಟ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು. |

| | | |
|---|---|---|
| | | ಕೊರೋನಾ 2ನೇ ಅಲೆಯ ನಂತರ ರಾಜ್ಯ ಸರ್ಕಾರದ ಇಂಧನ ಇಲಾಖೆಯು ದಿನಾಂಕ 21/6/2021 ರ ಆದೇಶದಂತೆ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳು ಪಾವತಿಸಬೇಕಾದ ಮೇ ಮತ್ತು ಜೂನ್ 2021 ತಿಂಗಳ ಬೇಡಿಕೆ/ ನಿಗದಿತ ಶುಲ್ಕವನ್ನು ಮನ್ನಾ ಮಾಡಿರುತ್ತದೆ. |
| ಇ) | ಮುಂಬರುವ ದಿನಗಳಲ್ಲಿ ಇವರಿಗಾಗಿ ಹಮ್ಮಿಕೊಳ್ಳಬಹುದಾದ ಕಾರ್ಯಕ್ರಮಗಳೇನು? | ಎಂ.ಎಸ್.ಎಂ.ಇ ಗಳಿಗೆ ಪ್ರೋತ್ಸಾಹ ನೀಡಲು ಸರ್ಕಾರವು ಸರ್ಕಾರದ ಆದೇಶ ಸಂ. ಸಿಐ 199 ಎಸ್‌ಪಿಐ 2018 ದಿನಾಂಕ 13.8.2020 ರನ್ವಯ ಹೊಸ ಕೈಗಾರಿಕಾ ನೀತಿ 2020-25 ನ್ನು ಜಾರಿಗೆ ತಂದಿರುತ್ತದೆ. ಇದರನ್ವಯ ದೊರೆಯುವ ಪ್ರೋತ್ಸಾಹ ಮತ್ತು ರಿಯಾಯಿತಿಗಳು ಈ ಕೆಳಗಿನಂತಿದೆ.<br>1. ಮುದ್ರಾಂಕ ಶುಲ್ಕ ವಿನಾಯಿತಿ<br>2. ನೋಂದಣಿ ಶುಲ್ಕ ರಿಯಾಯಿತಿ.<br>3. ಬಂಡವಾಳ ಹೂಡಿಕೆ ಸಹಾಯಧನ<br>4. ಕಿರು ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಸಹಾಯಧನ<br>5. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>6. ರಫ್ತು ಆಧಾರಿತ ಘಟಕಗಳಿಗೆ ರಿಯಾಯಿತಿ.<br>7. ತ್ಯಾಜ್ಯ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ.<br>8. ವಿದ್ಯುತ್ ತೆರಿಗೆ ವಿನಾಯಿತಿ.<br>9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ<br>10. ಮಳೆ ನೀರುಕೊಯ್ಲು / ಸಂರಕ್ಷಣೆ ಸಹಾಯಧನ |

**ಸಿಐ 159 ಎಸ್‌ಎಸ್‌ಐ 2021**

[ಎನ್ ನಾಗರಾಜ್ (ಎಂ.ಟಿ.ಬಿ)]
**ಪೌರಾಡಳಿತ, ಸಣ್ಣ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸಚಿವರು.**